Ap

## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | : 11 |
| ಸದಸ್ಯರ ಹೆಸರು | : ಶ್ರೀ ಅಮರನಾಥ ಪಾಟೀಲ್ |
| ಉತ್ತರಿಸುವ ಸಚಿವರು | : ತೋಟಗಾರಿಕೆ ಮತ್ತು ಕೃಷಿ ಮಾರುಕಟ್ಟೆ ಸಚಿವರು |
| ಉತ್ತರಿಸಬೇಕಾದ ದಿನಾಂಕ | : 27.02.2018. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹೈದರಾಬಾದ್ – ಕರ್ನಾಟಕ ಭಾಗದ 6 ಜಿಲ್ಲೆಗಳು ಹಾಗೂ ಹರಪ್ಪನಹಳ್ಳಿ ತಾಲ್ಲೂಕಿನಲ್ಲಿ ತೋಟಗಾರಿಕೆ ಇಲಾಖೆಯ ವತಿಯಿಂದ ವಿವಿಧ ಯೋಜನೆಗಳ ಸಹಾಯಧನ ಸವಲತ್ತುಗಳು ಪ್ರಚಾರದ ಕೊರತೆಯಿಂದ ಗ್ರಾಮೀಣ ಭಾಗದ ರೈತರಿಗೆ ಮಾಹಿತಿ ಲಭ್ಯವಾಗದೆ ಸದರಿ ಸವಲತ್ತುಗಳನ್ನು ಪಡೆಯದಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು) | ತೋಟಗಾರಿಕೆ ಇಲಾಖೆಯಲ್ಲಿನ ಸವಲತ್ತುಗಳನ್ನು ಪ್ರಚಾರ ಮಾಡಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1. ಗ್ರಾಮ ಸಭೆಗಳಲ್ಲಿ ತೋಟಗಾರಿಕೆ ಇಲಾಖೆಯ ಯೋಜನೆಗಳ ಬಗ್ಗೆ ರೈತರಿಗೆ ಮಾಹಿತಿ ನೀಡಲಾಗಿದೆ.<br>2. ಕರಪತ್ರ ಹಂಚುವ ಮೂಲಕ, ಮುದ್ರಣಗಳ ಮೂಲಕ ಪ್ರಚಾರ ಕೈಗೊಳ್ಳಲಾಗಿದೆ.<br>3. ಅಲ್ಲದೇ ಮಾಧ್ಯಮಗಳ, ದಿನಪತ್ರಿಕೆಗಳ ಮೂಲಕ ಇಲಾಖಾ ಯೋಜನೆಗಳ ಪ್ರಚಾರ ಕೈಗೊಳ್ಳಲಾಗಿದೆ.<br>4. ರೈತರಿಗೆ ಕಾರ್ಯಾಗಾರ/ತರಬೇತಿ ಕಾರ್ಯ ಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಕ್ರಮ ಕೈಗೊಳ್ಳಲಾಗಿದೆ. |
| ಆ) | ರೈತರಿಗೆ ತೋಟಗಾರಿಕೆ ಬೆಳೆಗಳಿಗೆ ಸರ್ಕಾರದಿಂದ ಸಿಗುವ ಸಹಾಯಧನ, ಸವಲತ್ತು ಹಾಗೂ ವಿವಿಧ ಯೋಜನೆಗಳಾವುವು; (ಜಿಲ್ಲಾವಾರು ಮಾಹಿತಿ ನೀಡುವುದು) | ರೈತರಿಗೆ ತೋಟಗಾರಿಕೆ ಬೆಳೆಗಳಿಗೆ ಸರ್ಕಾರದಿಂದ ಸಿಗುವ ಸಹಾಯಧನ, ಸವಲತ್ತು ಹಾಗೂ ವಿವಿಧ ಯೋಜನೆಗಳ ಜಿಲ್ಲಾವಾರು ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| ಇ) | ಹೈದ್ರಾಬಾದ್ ಕರ್ನಾಟಕ ಭಾಗದ ಜಿಲ್ಲೆಗಳಿಗೆ ಕಳೆದ 2 ವರ್ಷಗಳಿಂದ ತೋಟಗಾರಿಕೆ | ಹೈದ್ರಾಬಾದ್ ಕರ್ನಾಟಕ ಭಾಗದ ಜಿಲ್ಲೆಗಳಿಗೆ ಕಳೆದ 2 ವರ್ಷಗಳಿಂದ ತೋಟಗಾರಿಕೆ |

| | | |
|---|---|---|
| | ಇಲಾಖೆಯಲ್ಲಿನ ವಿವಿಧ ಯೋಜನೆಗಳ ಅಡಿಯಲ್ಲಿ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನವೆಷ್ಟು? (ಜಿಲ್ಲಾವಾರು ಮಾಹಿತಿ ನೀಡುವುದು) | ಇಲಾಖೆಯಲ್ಲಿನ ವಿವಿಧ ಯೋಜನೆಗಳ ಅಡಿಯಲ್ಲಿ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನದ ಜಿಲ್ಲಾವಾರು ವಿವರಗಳನ್ನು ಅನುಬಂಧ-2 ರಲ್ಲಿ ಒದಗಿಸಿದೆ. |
| ಈ) | ಹೈದ್ರಾಬಾದ್-ಕರ್ನಾಟಕ ಭಾಗದ 6 ಜಿಲ್ಲೆಗಳು ಹಾಗೂ ಹರಪ್ಪನಹಳ್ಳಿ ತಾಲ್ಲೂಕಿನಲ್ಲಿ ಸಹಾಯಧನ ಹಾಗೂ ವಿವಿಧ ಯೋಜನೆಗಳ ಸವಲತ್ತು ಕೋರಿ ಬಂದಿರುವ ಅರ್ಜಿಗಳ ಸಂಖ್ಯೆ ಎಷ್ಟು, ಎಷ್ಟು ಮಂದಿಗೆ ಸಹಾಯಧನ ಹಾಗೂ ವಿವಿಧ ಯೋಜನೆಗಳಲ್ಲಿ ಸವಲತ್ತು ನೀಡಲಾಗಿದೆ. ಬಾಕಿ ಇರುವ ಪ್ರಕರಣಗಳೆಷ್ಟು; (ಯೋಜನೆವಾರು ಫಲಾನುಭವಿಗಳ ಹೆಸರು ಹಾಗೂ ಲೆಕ್ಕ ಶೀರ್ಷಿಕೆ ಸಹಿತ ವಿವರ ನೀಡುವುದು) | ಹೈದ್ರಾಬಾದ್-ಕರ್ನಾಟಕ ಭಾಗದ 6 ಜಿಲ್ಲೆಗಳು ಹಾಗೂ ಹರಪ್ಪನಹಳ್ಳಿ ತಾಲ್ಲೂಕಿನಲ್ಲಿ ಸಹಾಯಧನ ಹಾಗೂ ವಿವಿಧ ಯೋಜನೆಗಳ ಸವಲತ್ತು ಕೋರಿ ಬಂದಿರುವ ಅರ್ಜಿಗಳ ಸಂಖ್ಯೆ ಸಹಾಯಧನ ನೀಡಿರುವ ಅರ್ಜಿಗಳ ಸಂಖ್ಯೆ ವಿವರ ಹಾಗೂ ವಿವಿಧ ಯೋಜನೆಗಳಲ್ಲಿ ಸವಲತ್ತು ನೀಡಿರುವ ಅರ್ಜಿಗಳ ಸಂಖ್ಯೆ, ಹಾಗೂ ಬಾಕಿ ಇರುವ ಪ್ರಕರಣಗಳ ಸಂಖ್ಯೆ ಮತ್ತು ಯೋಜನೆವಾರು ಫಲಾನುಭವಿಗಳ ಹೆಸರು ಹಾಗೂ ಲೆಕ್ಕ ಶೀರ್ಷಿಕೆ ಸಹಿತ ವಿವರಗಳನ್ನು ಅನುಬಂಧ-3 ರಲ್ಲಿ ಒದಗಿಸಿದೆ. |
| ಉ) | ವಿವಿಧ ಯೋಜನೆಯಡಿಯಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲು ಇರುವ ಮಾನದಂಡಗಳೇನು; ಯಾವ ಆಧಾರದ ಮೇಲೆ ಆಯ್ಕೆ ಪಟ್ಟಿಯನ್ನು ಅಂತಿಮ ಗೊಳಿಸಲಾಗುವುದು? (ಜಿಲ್ಲಾವಾರು ಮಾಹಿತಿ ನೀಡುವುದು) | ವಿವಿಧ ಯೋಜನೆಯಡಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲು ಇರುವ ಮಾನದಂಡಗಳ ವಿವರಗಳನ್ನು ಅನುಬಂಧ-4 ರಲ್ಲಿ ಒದಗಿಸಿದೆ. |

ಸಂಖ್ಯೆ: ತೋಇ 35 ತೋಇವಿ 2018

(ಎಸ್.ಎಸ್.ಮಲ್ಲಿಕಾರ್ಜುನ್)

ತೋಟಗಾರಿಕೆ ಮತ್ತು ಕೃಷಿ ಮಾರುಕಟ್ಟೆ ಸಚಿವರು